The New Flavour of Language Textbooks – NCERT initiative

ಭಾಷಾಪಠ್ಯಗಳ ಹೊಸ ಸ್ವಾದ–ಎನ್.ಸಿ.ಇ. ಆರ್‌ಟಿಯ ಉಪಕ್ರಮ

ಕಮಲೇಶ್ ಚಂದ್ರ ಜೋಶಿ

ಈಚೆಗಿನ ವರೆಗೂ ನಮ್ಮ ಭಾಷಾ ಪಠ್ಯಪುಸ್ತಕಗಳು ಮಕ್ಕಳಲ್ಲಿ ದೇಶದ ಬಗ್ಗೆ ಪ್ರೀತಿ, ಗೌರವಗಳನ್ನು ಬೆಳೆಸಿ ಅವರನ್ನು ಜವಾಬ್ದಾರಿಯುತ ನಾಗರಿಕರನ್ನಾಗಿ ರೂಪಿಸುವುದಕ್ಕೆ ಒತ್ತು ನೀಡುವ ಸಿದ್ಧ ಚೌಕಟ್ಟನ್ನು ಹೊಂದಿದ್ದವು. ಭಾಷೆಯು ಸಂಪರ್ಕದ ಸಾಧನ ಎಂದಷ್ಟೆ ಭಾವಿಸಲಾಗಿತ್ತು. ಅದು ಹಲವು ಬಗೆಯ ಮಾಹಿತಿಯನ್ನೂ ಅನುಭವಗಳನ್ನೂ ಆ ಕುರಿತಾದ ಒಳನೋಟಗಳನ್ನೂ ಶೋಧಿಸುವುದಕ್ಕೆ ಮಕ್ಕಳಿಗೆ ಸಹಾಯ ಮಾಡುವ ಒಂದು ಮಾಧ್ಯಮ ಎಂಬ ತಿಳಿವಳಿಕೆ ಇರಲಿಲ್ಲ. ಮಕ್ಕಳಿಗೆ ಅನುಕ್ರಮವಾಗಿ ಅಕ್ಷರಮಾಲೆ, ಶಬ್ದಗಳು ಹಾಗೂ ವಾಕ್ಯಗಳನ್ನು ಕಲಿಸುವ ಪೂರ್ವನಿರ್ಧರಿತ ನಮೂನೆಯಲ್ಲಿ ಭಾಷಾ ಬೋಧನೆ ನಡೆಯುತ್ತಿತ್ತು. ಈ ಚೌಕಟ್ಟಿಗೆ ಒಳಪಟ್ಟು ಪಠ್ಯಕ್ರಮವು ಒಂದು ಸಿದ್ಧ ಸ್ವರೂಪವನ್ನು ಹೊಂದಿದ್ದು ಮಗುವು ವಿಷಯವನ್ನು ಯಾಂತ್ರಿಕವಾಗಿ ನೆನಪಿಟ್ಟುಕೊಳ್ಳುವಂತೆ ಮಾಡಲಾಗುತ್ತಿತ್ತು. ಮಗುವು ಯೋಚಿಸಿ ಬರೆಯುವುದಕ್ಕೆ ಇಲ್ಲಿ ಪ್ರಚೋದನೆ ಇರಲಿಲ್ಲ. ಭಾಷೆಯನ್ನು ಸಹಜ ಪ್ರಕ್ರಿಯೆಯಾಗಿ ಕಲಿಯುವುದಕ್ಕೆ ಉತ್ತೇಜನ ಇರಲಿಲ್ಲ.

ಈ ರೀತಿಯ ಸನ್ನಿವೇಶದಲ್ಲಿ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ಮಂಡಳಿ (ಎನ್‌ಸಿಇಆರ್‌ಟಿ) ಈಚೆಗೆ ಪ್ರಕಟಿಸಿರುವ ಭಾಷಾ ಕಲಿಕೆಯ ಪಠ್ಯಪುಸ್ತಕಗಳು ಆಹ್ಲಾದಕರವಾದ ಹೊಸ ಗಾಳಿಯಂತೆ ಬಂದಿವೆ. ಈ ಪಠ್ಯಪುಸ್ತಕಗಳನ್ನು ನೋಡಿ, ಓದಿ ಶಾಲಾ ಕೊಠಡಿಗಳಲ್ಲಿ ಮಕ್ಕಳನ್ನು ಕೂರಿಸಿಕೊಂಡು ಉಪಯೋಗಿಸಿದಾಗ ಮಾತ್ರ ಇವುಗಳಲ್ಲಿನ ಪ್ರಗತಿಪರ ವಿಧಾನವು ಅರಿವಿಗೆ ಬಂದೀತು.

ಎನ್ ಸಿ ಇ ಆರ್ ಟಿ ಹೊರತಂದಿರುವ ಈ ಭಾಷಾ ಪಠ್ಯಪುಸ್ತಕ ಮಾಲೆಯ ಹೆಸರು "ರಿಮ್ ಝಿಮ್" ಎಂದು. ಮಗುವಿನ ಕಲ್ಪನಾ ಶಕ್ತಿ, ಯೋಚನಾ ಶಕ್ತಿ ಹಾಗೂ ವಿವರಣಾ ಶಕ್ತಿಯನ್ನು ಪ್ರಚೋದಿಸುವ ರೀತಿಯಲ್ಲಿ ಈ ಪುಸ್ತಕಗಳನ್ನು ತಯಾರಿಸಲಾಗಿದೆ. ತರಗತಿಯ ಚಟುವಟಿಕೆಗಳನ್ನು ರೂಪಿಸುವಾಗಲೂ ಇದನ್ನೆ ಗಮನದಲ್ಲಿ ಇರಿಸಿಕೊಳ್ಳಲಾಗಿದೆ. ಮಕ್ಕಳಿಗೆ ತಮ್ಮ ಯೋಚನೆ ಗಳನ್ನು ಮುಕ್ತವಾಗಿ ಪ್ರಕಟಿಸಲು ಸಾಧ್ಯವಾಗುವಂತಹ ಪರಿಸರವನ್ನು ಸೃಷ್ಟಿಸಲು ಉಪಾಧ್ಯಾಯರಿಗೆ ಬಹಳಷ್ಟು ಅವಕಾಶಗಳನ್ನು ಒದಗಿಸುವ ರೀತಿಯಲ್ಲಿ ಇಲ್ಲಿನ ಅಧ್ಯಾಯಗಳನ್ನು ರೂಪಿಸಲಾಗಿದೆ.

ಒಂದನೇ ತರಗತಿಯ ಪಠ್ಯ ಪುಸ್ತಕದ ಮುಖಪುಟದಲ್ಲಿನ ಈ ಕೆಳಗಿನ ಹಾಡಿನ ಸಾಲುಗಳನ್ನು ಓದಿದಾಗ ನಾವು ನಮ್ಮ ಬಾಲ್ಯದ ನೆನಪುಗಳಿಗೆ ಜಾರುತ್ತೇವೆ, ಹಳ್ಳಿಗೆ ಹೋಗುತ್ತೇವೆ, ಅಲ್ಲಿನ ಪರಿಸರದಲ್ಲಿ ಸುತ್ತಾಡುತ್ತೇವೆ, ಮರಗಳ ಕೆಳಗೆ ಆಟವಾಡುತ್ತೇವೆ, ಅಲ್ಲಿನ ಬೇಸಿಗೆ, ಚಳಿ ಮಳೆಗಾಲಗಳನ್ನು ಅನುಭವಿಸುತ್ತೇವೆ:

"ಹರಾ ಸಮುಂದರ್ ಗೆಹರಾ ಪಾನಿ

ಬೋಲ್ ಮೇರಿ ಮಚಲಿ ಕಿತ್‌ನಾ ಪಾನಿ

ಕಮರ್ ಕಮರ್ ತಕ್ ಗೆಹರಾ ಪಾನಿ

ಬೋಲ್ ಮೇರಿ ಮಚಲಿ ಕಿತ್‌ನಾ ಪಾನಿ"

(ನೀಲಿ ಸಮುದ್ರ ಆಳದ ನೀರು / ಹೇಳು ನನ್ನ ಮೀನೇ ನೀರೆಷ್ಟೆಂದು / ಸೊಂಟದವರೆಗಿನ ಆಳದ ನೀರು / ಹೇಳು ನನ್ನ ಮೀನೇ ನೀರೆಷ್ಟೆಂದು)

ಹಿಂದಿನ ಪಠ್ಯ ಪುಸ್ತಕಗಳಲ್ಲಿ ಸಾಮಾನ್ಯವಾಗಿ 'ಸ್ಲೀಪಿಂಗ್ ಬ್ಯೂಟಿ' , 'ದಿ ಬ್ಲೈಂಡ್ ಪ್ರಿನ್ಸ್' ಮುಂತಾದ ಪಾಶ್ಚಾತ್ಯ ಕತೆಗಳ ಅನುವಾದಗಳು ಇರುತ್ತಿದ್ದವು. ಇಪ್ಪತ್ತೊಂದನೇ ಶತಮಾನದ ಭಾರತದ ಶಾಲೆಗಳ ಒಂದನೇ ತರಗತಿಯ ಪಠ್ಯ ಪುಸ್ತಕದಲ್ಲಿ ಈ ಮಣ್ಣಿನ ತಾಜಾ ಹಾಡುಗಳನ್ನು ಕಾಣುವುದೇ ಒಂದು ಅನಿರ್ವಚನೀಯ ಆನಂದವನ್ನು ಕೊಡುತ್ತದೆ. ಮಣ್ಣಿನ ಮಕ್ಕಳೊಂದಿಗೆ ನೇರ ಸಂಪರ್ಕವನ್ನು ಸಾಧಿಸುವ ಈ ಸಾಲುಗಳು ಆ ಪಠ್ಯದಲ್ಲಿ ಜೀವವು ತುಡಿಯುವಂತೆ ಮಾಡುತ್ತದೆ.

ನಮ್ಮ ಸುತ್ತಲಿನ ಓದಿನ ಸಾಮಗ್ರಿ

ನಮ್ಮ ದೇಶದ ಲಕ್ಷಾಂತರ ಮಕ್ಕಳು ಮುದ್ರಿತ ಪುಸ್ತಕಗಳಿಗೆ ಮೊದಲು ತೆರೆದುಕೊಳ್ಳುವುದೇ ಒಂದನೇ ತರಗತಿಯಲ್ಲಿ; ಅವರಿಗೆ ಈ ಹೊಸ ಪುಸ್ತಕಗಳು ನಿಜವಾದ ಆನಂದವನ್ನು ನೀಡುತ್ತವೆ. ಈ ಪುಸ್ತಕಗಳಲ್ಲಿ ಮಕ್ಕಳಿಗೆ ಅವರದೇ ಸುತ್ತಲಿನ ಲೋಕ ತೆರೆದುಕೊಳ್ಳುತ್ತದೆ; ಅದನ್ನು ಅವರು ಮುಕ್ತವಾಗಿ ಅನುಭವಿಸಬಲ್ಲರು. ಪುಸ್ತಕದಲ್ಲಿನ ಚಿತ್ರಗಳು ಮಕ್ಕಳಿಗೆ ಅನುಭವಗಳನ್ನು ಹಂಚಿಕೊಳ್ಳಲು, ಅಂದಾಜಿಸಲು ಹಾಗೂ ತರ್ಕ ಮಾಡಲು ಅವಕಾಶಗಳನ್ನು ಒದಗಿಸುತ್ತದೆ. ಅದೇನೇ ಇದ್ದರೂ ಈ ಪಠ್ಯದಲ್ಲಿ ಇಂತಹ ಚಿತ್ರಗಳು ಯಾಕೆ ಎಂಬುದನ್ನು ಶಿಕ್ಷಕರು ಅರ್ಥಮಾಡಿಕೊಳ್ಳಬೇಕಾದ್ದು ಮುಖ್ಯ. ಶಿಕ್ಷಕರು ಈ ರೀತಿಯ ಪ್ರಶ್ನೆಗಳನ್ನು ತಮಗೇ ಕೇಳಿಕೊಳ್ಳಬೇಕು: "ಈ ಚಿತ್ರಗಳ ಕುರಿತಾಗಿ ಮಕ್ಕಳೊಡನೆ ನಾವು ಏನು ಮಾತನಾಡಬೇಕು? ಅವುಗಳ ಕುರಿತಾದ ಮಾತುಕತೆಯನ್ನು ಯಾಕೆ ಪ್ರೋತ್ಸಾಹಿಸಬೇಕು?" ಹಾಗಾದರೆ ಮಾತ್ರವೇ ಇಂತಹ ಜೀವ ಮಿಡಿಯುವ ಚಿತ್ರಗಳನ್ನು ಈ ಪುಸ್ತಕದಲ್ಲಿ ಸೇರಿಸಿರುವುದು ಸಾರ್ಥಕವೆನಿಸೀತು.

ಮಕ್ಕಳ ಮನೆ ಹಾಗೂ ಅವರ ನಿಕಟ ಪ್ರಪಂಚದಲ್ಲಿ ಬರುವ ಶಾಲೆ, ರೈಲು ನಿಲ್ದಾಣ, ಅಡುಗೆ ಮನೆ, ಜೋಕಾಲಿ, ಹೊಲ ಗದ್ದೆ, ಬಸ್ ಪ್ರಯಾಣ ಮುಂತಾದವುಗಳೇ ಈ ಚಿತ್ರಗಳಲ್ಲಿ ಇರುವಂತಹವು. ಇವುಗಳಿಗೆ ಆಲೋಚನೆಗಳ ಮೂಲಕ ಸ್ಪಂದಿಸಿ ಅಭಿವ್ಯಕ್ತಗೊಳಿಸಲು ಮಕ್ಕಳು ಶಕ್ತರಾಗುತ್ತಾರೆ. ಮಕ್ಕಳು ತಮ್ಮೊಳಗೇ ನಡೆಸುವ ಮಾತುಕತೆಗಳು ಈ ಪರಿಸರದೊಂದಿಗೆ ಸಂಬಂಧವನ್ನು ಬೆಳೆಸಲು, ಹಾಗೂ ಅವುಗಳ ಬಗ್ಗೆ ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸಲು ಸಹಾಯ ಮಾಡುತ್ತವೆ.

ಜಾನಪದ ಕಲೆ, ಜಾನಪದ ಕತೆಗಳಿಗೆ ಸ್ಥಾನ

ಈ ಪಠ್ಯ ಪುಸ್ತಕಗಳಲ್ಲಿ ಭಾರತೀಯ ಸಂಸ್ಕೃತಿಯನ್ನೂ ನಮ್ಮ ವೈವಿಧ್ಯಮಯ ಜಾನಪದ ಕತೆಗಳ ಸಂಪತ್ತನ್ನೂ ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ವಿವಿಧ ರಾಜ್ಯಗಳ ಜಾನಪದ ಕಲೆಗಳ ಸುಂದರವಾದ ಚಿತ್ರಗಳು ಇದರಲ್ಲಿವೆ. ಬಿಹಾರದ ಮಧುಬನಿ, ಮಹಾರಾಷ್ಟ್ರದ ವರ್ಲಿ ಹಾಗೂ ಒಡಿಶಾಗಳ ಪಟಚಿತ್ರಗಳನ್ನು ಉದಾಹರಿಸಬಹುದು. ಸ್ಥಳೀಯ ಸಂಸ್ಕೃತಿಗಳನ್ನು ಸೇರಿಸಿಕೊಂಡರೆ ಶಾಲಾ ಪಠ್ಯ ಪದ್ಧತಿ ಶ್ರೀಮಂತವಾಗುವುದು ಎಂಬುದಕ್ಕೆ ಇದು ಒಂದು ನಿದರ್ಶನವಾಗಿದೆ. ಈ ಚಿತ್ರಗಳು ಮಕ್ಕಳಲ್ಲಿ ಸುಂದರವಾದುದನ್ನು ಮೆಚ್ಚಿಕೊಳ್ಳುವ ಗುಣವನ್ನು ಬೆಳೆಸುತ್ತದೆ. ಪಠ್ಯ ಪುಸ್ತಕಗಳ ಮರು ವಿನ್ಯಾಸದಲ್ಲಿ ಇದು ಒಂದು ಹೊಸ ಹೆಜ್ಜೆಯೇ ಸರಿ.

ಅಭಿವ್ಯಕ್ತಿಗೆ ಅವಕಾಶ

ಈ ನವೀನತೆಯನ್ನು ನೋಡಿ: 'ರಿಮ್ ಝಿಮ್'  ನ ೫೨ನೇ ಪುಟದಲ್ಲಿ ಹೀಗಿದೆ; ಅಲ್ಲಿ ಬಲು ಜನಪ್ರಿಯವಾದ ಕಾಗೆ-ನರಿ ಕತೆ ಇದೆ. ಮುಂದಿನ ಪುಟದಲ್ಲಿ ಅವೇ ಪ್ರಾಣಿಗಳ ಚಿತ್ರಗಳನ್ನು ಕೊಟ್ಟು ಮಕ್ಕಳಿಗೆ ಅವುಗಳ ಆಧಾರದಲ್ಲಿ ಹೊಸ ಕತೆಗಳನ್ನು ಹೆಣೆಯಲು ಅವಕಾಶ ಕೊಡಲಾಗಿದೆ. ಮಕ್ಕಳಿಗೆ ತಮ್ಮದೇ ಯೋಚನೆಗಳನ್ನು ಮಾಡಲು, ಹೊಸ ಕಲ್ಪನೆಗಳನ್ನು ಹೆಣೆಯಲು ಸಾಧ್ಯವಾಗುತ್ತದೆ. ಎಲ್ಲಾ ಮಕ್ಕಳೂ ಹೊಸ ಕತೆಗಳನ್ನು ಹೆಣೆಯುತ್ತಾರೆ ಎಂದೇನೂ ಶಿಕ್ಷಕರು ನಿರೀಕ್ಷಿಸಬೇಕಾಗಿಲ್ಲ. ಹಾಗೆ ಸಾಧ್ಯವಾಗುವ ಮಕ್ಕಳಿಗೆ ಅವಕಾಶ ಒದಗಿಸಬೇಕು ಹಾಗೂ ಎಲ್ಲರಿಗೂ ಪ್ರಚೋದನೆ ಸಿಗಬೇಕು ಎಂಬುದೇ ಉದ್ದೇಶವಾಗಿದೆ.

ಈ ಪಠ್ಯ ಪುಸ್ತಕಗಳು ಆಟಕ್ಕೆ, ಒಗ್ಗೂಡಿ ಚರ್ಚಿಸಿ ಹೊಸ ಆಲೋಚನೆಗಳನ್ನು ಕಂಡುಕೊಳ್ಳುವುದಕ್ಕೆ, ಕರಕುಶಲ ಚಟುವಟಿಕೆಗಳಿಗೆ ಮುಂತಾದವಕ್ಕೆ ಹೆಚ್ಚು ಅವಕಾಶಗಳನ್ನು ಕೊಡುತ್ತವೆ. ಆದರೆ ಇವೆಲ್ಲವನ್ನೂ ಶಿಕ್ಷಕರು ತರಗತಿಯೊಳಗೇ ಮಕ್ಕಳಿಂದ ಮಾಡಿಸಬೇಕು ಎಂಬುದೇ ಮುಖ್ಯವಾದದ್ದು; ಮನೆಗೆಲಸದ ಮೂಲಕ ಅಲ್ಲ.

ಕೆಲವು ಕತೆಗಳು

ಈ ಪಠ್ಯ ಪುಸ್ತಕದಲ್ಲಿನ ಎಲ್ಲಾ ಶೀರ್ಷಿಕೆಗಳನ್ನೂ ಓದಲು ಕಲಿಯುವುದಕ್ಕೆ ಅನುಕೂಲವಾಗುವ ರೀತಿಯಲ್ಲಿ ಏರ್ಪಡಿಸಲಾಗಿದೆ. ಶಿಕ್ಷಕರಿಗೆ ಯಾವ ಪ್ರಶ್ನೆಗೂ ಉತ್ತರಿಸಬೇಕೆಂಬ ಬಾಧ್ಯತೆಯ ಹಂಗಿಲ್ಲದೆ ಮಕ್ಕಳು ಯಾವ ಭಯವೂ ಇಲ್ಲದೆ ಇಲ್ಲಿನ ಕತೆಗಳನ್ನು ಓದುವ ಆನಂದವನ್ನು ಅನುಭವಿಸಬಹುದಾಗಿದೆ.

ಇನ್ನು ಕೆಲವು ಅಧ್ಯಾಯಗಳನ್ನು, ಮಕ್ಕಳ ಕುತೂಹಲವನ್ನು ಕೆರಳಿಸುವ ಮಾದರಿಯಲ್ಲಿ ರೂಪಿಸಲಾಗಿದೆ. ಕೆಲವು ಅಧ್ಯಾಯಗಳು ಕಾಮಿಕ್ ಮಾದರಿಯಲ್ಲಿವೆ.

ಸಾಂಪ್ರದಾಯಿಕ ಮಾದರಿಯ ಪಠ್ಯಗಳು ಮಕ್ಕಳಿಗೆ ಮೊದಲು ಅಕ್ಷರ ಮಾಲೆಯ ಕೆಲವು ಅಕ್ಷರಗಳನ್ನು ಕಲಿಸಿ ಅವುಗಳಿಂದ ಶಬ್ದಗಳನ್ನು ತಿಳಿಯಲು ಅಭ್ಯಾಸ ಮಾಡಿಸುತ್ತವೆ. ಈ ವಿಧಾನದಲ್ಲಿ ಮಗುವಿಗೆ ಶಬ್ದಗಳ ಅರ್ಥಪೂರ್ಣ ಸಂದರ್ಭ ತಿಳಿಯದೇ ಇರುವುದರಿಂದ ಸಂತೋಷವೂ ಲಭ್ಯವಾಗುವುದಿಲ್ಲ. ಹೊಸ ಎನ್‌ಸಿಇಆರ್‌ಟಿ ಪಠ್ಯಪುಸ್ತಕವು, ಮಕ್ಕಳು ಓದಿ, ಅರ್ಥಮಾಡಿಕೊಂಡು, ಯೋಚಿಸಿ ಪರಸ್ಪರ ಸಂಬಂಧವನ್ನು ತಿಳಿದುಕೊಂಡು ಸಂದರ್ಭವನ್ನು ವಿಶ್ಲೇಷಿಸುವ ಸಾಮರ್ಥ್ಯವನ್ನು ಪಡೆಯುವ ರೀತಿಯಲ್ಲಿ ರಚಿತವಾಗಿದೆ.

'ಬಡಾಯಿಕೋರ ಜೇನ್ನೊಣ' ಎಂಬ ಕತೆಯಲ್ಲಿ ಹೀಗೆ ಒಂದು ಪ್ರಶ್ನೆ ಇದೆ: 'ಜೇನ್ನೊಣವು ಜೇಡನ ಬಲೆಯೊಳಗೆ ಸಿಲುಕಿದ್ದರೆ ಅದರ ಗತಿ ಏನಾಗುತ್ತಿತ್ತು ?

–ಕತೆಯನ್ನು ಪೂರ್ತಿಗೊಳಿಸಿರಿ.' ಇನ್ನೊಂದು ಪ್ರಶ್ನೆ ಹೀಗಿದೆ: 'ಈ ಕತೆಗೆ ಒಂದು ಹೊಸ ತಲೆಬರಹ ಕೊಡಿರಿ.' ಮಕ್ಕಳಿಗೆ ಇದು ಒಂದು ಹೊಸ ರೀತಿಯ ಸವಾಲೇ ಆಗಿದೆ.

ಮಕ್ಕಳು ಈ ಕತೆಗಳನ್ನು ಓದಿ ನೆನಪಿಟ್ಟುಕೊಂಡು, ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸಬೇಕು ಎಂಬುದು ಮಾತ್ರವೇ ಇಲ್ಲಿನ ಉದ್ದೇಶವಲ್ಲ– ಬದಲಾಗಿ ಮಕ್ಕಳು ಕತೆಯನ್ನು ಬರೆಯುವ– ಹೆಣೆಯುವ ಪ್ರಕ್ರಿಯೆಯನ್ನೇ ಅರ್ಥಮಾಡಿಕೊಂಡು ಅಂತಹ ಹೊಸ ಕತೆಯೊಂದನ್ನು ತಾವೇ ರೂಪಿಸಲು ಶಕ್ತರಾಗಬೇಕು ಎಂಬುದೇ ಆಗಿದೆ ಎಂದು ಇಲ್ಲಿ ಗಮನಿಸಬೇಕು. ಇಲ್ಲಿನ ಹೆಚ್ಚಿನ ಅಭ್ಯಾಸಗಳೂ ಮಕ್ಕಳು ಮಾಹಿತಿಯನ್ನು ತಮ್ಮ ಸುತ್ತಲಿನ ಪರಿಸರದಿಂದ ಸಂಗ್ರಹಿಸುವಂತೆ ಮಾಡುತ್ತವೆ– ಇದರ ಉದ್ದೇಶ ಅವರಿಗೆ ಭಾಷೆಯ ಉಪಯೋಗವನ್ನು ತಿಳಿಸುವುದು ಹಾಗೂ ಅವರನ್ನು ತಮ್ಮ ಪರಿಸರಕ್ಕೆ ಸಂವೇದನಾಶೀಲರನ್ನಾಗಿ ಮಾಡುವುದು.

ನಮ್ಮ ಬದುಕಿನ ಭಾಗವೇ ಆಗಿರುವ ಸಂಸ್ಕೃತಿ, ಸಂಪ್ರದಾಯಗಳು, ಪರಿಸರ, ನಮ್ಮ ಕಲ್ಪನೆಗಳು ಹಾಗೂ ಯೋಚನೆಗಳೊಂದಿಗೆ ಈ ಪಠ್ಯಪುಸ್ತಕವು ನೇರ ಸಂಪರ್ಕವನ್ನು ಹೊಂದಿದೆ. ನಮ್ಮ ಬೇರುಗಳಾದ ಸಂಸ್ಕೃತಿ, ಸಂಪ್ರದಾಯ, ಪರಿಸರ, ಯೋಚನೆಗಳು ಹಾಗೂ ಅನುಭವಗಳಿಂದಲೇ ನಾವು ಹೊಸ ದೃಷ್ಟಿಗಳನ್ನು ಪಡೆದು, ಬರೆದು, ಅವುಗಳಿಂದ ಕಲಿತು ಮುಂದಕ್ಕೆ ಸಾಗುತ್ತೇವೆ.

ಕಲೆ ಮತ್ತು ಕರಕೌಶಲ್ಯಕ್ಕೆ ಪ್ರತ್ಯೇಕ ಪಠ್ಯಪುಸ್ತಕವನ್ನು ಅಭ್ಯಾಸಕ್ಕೆ ಇಡುವ ಅಗತ್ಯವಿಲ್ಲ ಎಂಬುದನ್ನು ಖಾಸಗಿ ಶಾಲೆಗಳವರು ಹಾಗೂ ಖಾಸಗಿ ಪ್ರಕಾಶನಗಳವರು ಬಹುಶಃ ಈ ಪಠ್ಯ ಪುಸ್ತಕಗಳಿಂದ ಕಲಿಯಬಹುದು. ಅಂತಹ ಪಠ್ಯ ಪುಸ್ತಕಗಳು ಮಕ್ಕಳ ಚೀಲದ ಭಾರವನ್ನೂ ಪೋಷಕರ ಖರ್ಚಿನ ಮೊತ್ತವನ್ನೂ ಹೆಚ್ಚಿಸುವ ಕೆಲಸವನ್ನಷ್ಟೆ ಮಾಡುತ್ತವೆ. ಈ ವಿಚಾರಗಳೆಲ್ಲವನ್ನೂ ಒಂದೇ ಪಠ್ಯ ಪುಸ್ತಕದಲ್ಲಿ ಅಂದವಾಗಿ ಅಡಕಗೊಳಿಸಬಹುದಾಗಿದೆ. ಈ ಪಠ್ಯ ಪುಸ್ತಕ ನಮ್ಮಲ್ಲೂ ಕೆಲವು ಯೋಚನೆಗಳನ್ನು ಪ್ರಚೋದಿಸುತ್ತವೆ– ಮಕ್ಕಳಿಗೆ ಕಲಿಸುವಾಗ ನಾವು ಮನನ ಮಾಡತಕ್ಕ ವಿಷಯವೇನು; ಶಿಕ್ಷಣದ ಉದ್ದೇಶ ಏನು; ಮಕ್ಕಳು ಜ್ಞಾನವನ್ನು ಹೇಗೆ ಅರ್ಥಪೂರ್ಣವಾಗಿ ಬೆಳೆಸಿಕೊಳ್ಳುತ್ತಾರೆ– ಇತ್ಯಾದಿ.

ಪೂರ್ವ ನಿರ್ಧರಿತವಾದ ಪಾರಂಪರಿಕ ವಿಧಾನದಲ್ಲಿ ಕಲಿಸಲು ಬಯಸುವ ಶಿಕ್ಷಕರಿಗೆ ಈ ಪಠ್ಯ ಪುಸ್ತಕಗಳು ಬಹುಶಃ ಅಸಮಾಧಾನವನ್ನು ಉಂಟುಮಾಡಬಹುದು. ಈ ಪುಸ್ತಕಗಳ ವಿನ್ಯಾಸದ ಉದ್ದೇಶ ಬರೇ ವರ್ಣಮಾಲೆಯನ್ನು ಕಲಿಸುವುದು ಅಲ್ಲವಾದುದರಿಂದ ಹಾಗೂ ಅದು ವ್ಯಾಕರಣ ಶುದ್ಧತೆ ಇರಬೇಕು ಎಂದು ಒತ್ತಾಯ ಹೇರದೇ ಇರುವುದರಿಂದ ಹೀಗಾಗಬಹುದು. ಮಕ್ಕಳು ಶಬ್ದಗಳನ್ನು ವಾಕ್ಯಗಳಲ್ಲಿ ಬಳಸುತ್ತಾ, ಸಂದರ್ಭಕ್ಕೆ ತಕ್ಕಂತೆ ಅರ್ಥವನ್ನು ಹೊಮ್ಮಿಸುವ ಪ್ರಕ್ರಿಯೆಯಲ್ಲಿಯೇ ಭಾಷೆಯ ವ್ಯಾಕರಣವನ್ನು ಕಲಿತುಕೊಳ್ಳುತ್ತಾರೆ ಎಂಬುದೇ ಈ ಪುಸ್ತಕದ ಉದ್ದೇಶವಾಗಿದೆ.

ಈ ಪಠ್ಯ ಪುಸ್ತಕಗಳು ಭಾಷೆಯ ಬೋಧನೆಯನ್ನು ಒಂದು ತುಂಬಾ ವಿಶಾಲವಾದ ದೃಷ್ಟಿಕೋನದಿಂದ ನೋಡುತ್ತವೆ. ಒಂದು ಮಗು ಆಗಲೇ ಪಡೆದಿರುವ ಜ್ಞಾನ, ಸುತ್ತಲಿನ ಸ್ಥಳಗಳು, ದೇಶದ ವೈವಿಧ್ಯ, ಬಹುಭಾಷಾ ಸ್ವರೂಪ ಹಾಗೂ ಭಾರತೀಯ ಸಂಸ್ಕೃತಿಗಳನ್ನು ಒಂದು ಪಠ್ಯಪುಸ್ತಕದಲ್ಲಿ ಹೇಗೆ ಇಳಿಸುವುದು ಸಾಧ್ಯ ಎಂಬುದನ್ನು ತೋರಿಸಿಕೊಡುತ್ತದೆ.

ಈ ಪಠ್ಯ ಪುಸ್ತಕಗಳ ರೀತಿ ಏನು ಎಂಬುದರ ಬಗ್ಗೆ ಶಿಕ್ಷಕರಿಗೆ ತಿಳಿಸಿ ಮನದಟ್ಟು ಮಾಡುವುದು ಅಗತ್ಯ; ಹಾಗೆ ಮಾಡಿದರೆ ಮಾತ್ರ ಈ ಪುಸ್ತಕದ ತಿರುಳನ್ನು ಅರ್ಥ ಮಾಡಿಕೊಂಡು ಅದರಂತೆ ತರಗತಿಯಲ್ಲಿ ಮಕ್ಕಳೊಂದಿಗೆ ಕೆಲಸ ಮಾಡಲು ಅವರಿಗೆ ಸಾಧ್ಯವಾಗುತ್ತದೆ. ಮಕ್ಕಳು ತಾವಾಗಿಯೇ ಯೋಚಿಸುವುದೂ ಅದನ್ನು ವ್ಯಕ್ತಪಡಿಸುವುದೂ ಸಾಧ್ಯವಾಗಬೇಕಿದ್ದರೆ ಶಿಕ್ಷಕರು ಟೆಸ್ಟು ಮತ್ತು ಪರೀಕ್ಷೆಗಳ ಕುರಿತಾದ ತಮ್ಮ ಗುಂಗಿನಿಂದ ಹೊರಬರುವುದು ಅಗತ್ಯ. ೨೦೦೫ ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಲ್ಲಿ ಸೂಚಿಸಲಾದ ಮೈಲುಗಲ್ಲಿನ ಸ್ಥಾಪನೆಯಲ್ಲಿ ಈ ಪಠ್ಯ ಪುಸ್ತಕಗಳು ಒಂದು ಮಹತ್ವದ ಹೆಜ್ಜೆಯಾಗಿದೆ. ಚೀನದ ನಾಣ್ಣುಡಿ ಹೇಳುವಂತೆ 'ದೊಡ್ಡ ಯಾತ್ರೆಗಳು ಸಣ್ಣ ಹೆಜ್ಜೆಯಿಂದಲೇ ಪ್ರಾರಂಭವಾಗುತ್ತವೆ.'

ಈ ಲೇಖನವನ್ನು ಭೋಪಾಲದ ಏಕಲವ್ಯ ಸಂಸ್ಥೆಯ ಪ್ರಕಟಣೆಯಾದ "ಶೈಕ್ಷಣಿಕ ಸಂದರ್ಭ" ಎಂಬ ಪತ್ರಿಕೆಯ ೨೦೦೮ ಫೆಬ್ರವರಿ ಹಾಗೂ ೨೦೦೯ ರ ನವೆಂಬರ್ ಸಂಚಿಕೆಗಳಲ್ಲಿ ಪ್ರಕಟಗೊಂಡ ಮೂಲ ಹಿಂದಿ ಲೇಖನದಿಂದ ರೂಪಿಸಿಕೊಳ್ಳಲಾಗಿದೆ.

ಕಮಲೇಶ್ ಚಂದ್ರ ಜೋಶಿ ಅವರು ಉತ್ತರಾಖಂಡದ ಅಜೀಂ ಪ್ರೇಂಜಿ ಪ್ರತಿಷ್ಠಾನದಲ್ಲಿ ಶೈಕ್ಷಣಿಕ ಹಾಗೂ ಶಿಕ್ಷಣ ಶಾಸ್ತ್ರಗಳ ಸಮನ್ವಯಕಾರರಾಗಿದ್ದಾರೆ. ಅವರು ಪ್ರಾಥಮಿಕ ಶಿಕ್ಷಣದ ವಿಷಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮುಖ್ಯವಾಗಿ ಆ ವಿಭಾಗದ ಭಾಷಾ ಶಿಕ್ಷಣ ಶಾಸ್ತ್ರ, ತರಬೇತಿ, ಕಲಿಕಾ ಸಾಮಗ್ರಿಗಳ ತಯಾರಿ, ಪ್ರಕಾಶನ ಹಾಗೂ ಸಂಶೋಧನೆಗಳಲ್ಲಿ ಹದಿನೈದು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ. ಅವರು ಐದು ವರ್ಷಗಳ ಕಾಲ 'ಪ್ರಾರಂಭ್' ಎಂಬ ಶೈಕ್ಷಣಿಕ ಪತ್ರಿಕೆಯ ಸಂಪಾದಕರಾಗಿದ್ದರು. ಅವರ ಲೇಖನಗಳು ಹಲವಾರು ಹಿಂದಿ ಭಾಷಾ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಅವರನ್ನು ಸಂಪರ್ಕಿಸುವ ವಿಳಾಸ:

kamlesh@azimpremjifoundation.org

ಹೇಳಿದರು ಎಂದು ಹೇಳುವ ನೂರಾರು ಬಗೆ !

ಪರಮಾಣು ಒಪ್ಪಂದಕ್ಕೆ ಶೀಘ್ರವೇ ಸಹಿ ಮಾಡಲಾಗುವುದೆಂದು ಡಾ. ಮನಮೋಹನ ಸಿಂಗ್ ಹೇಳಿದರು

ಪರಮಾಣು ಒಪ್ಪಂದಕ್ಕೆ ಸಹಿ ಹಾಕಲಾಗುವುದೆಂದು ಡಾ. ಮನಮೋಹನ ಸಿಂಗ್ ದೃಢೀಕರಿಸಿದರು

ಪರಮಾಣು ಒಪ್ಪಂದಕ್ಕೆ ಶೀಘ್ರ ಸಹಿ ಮಾಡಲಾಗುವುದೆಂದು ಡಾ. ಮನಮೋಹನ ಸಿಂಗ್ ಪ್ರಕಟಿಸಿದರು.

ಪರಮಾಣು ಒಪ್ಪಂದಕ್ಕೆ ಶೀಘ್ರ ಸಹಿ ಮಾಡಲಾಗುವುದೆಂದು ಡಾ. ಮನಮೋಹನ ಸಿಂಗ್ ಒತ್ತಿ ಹೇಳಿದರು.

ಪರಮಾಣು ಒಪ್ಪಂದಕ್ಕೆ ಶೀಘ್ರ ಸಹಿ ಮಾಡಲಾಗುವುದೆಂದು ಡಾ. ಮನಮೋಹನ ಸಿಂಗ್ ಪತ್ರಕರ್ತರಿಗೆ ಭರವಸೆ ನೀಡಿದರು.